ಗಣಕೀಯಾವಾಗಿ

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 939 |
| ಮಾನ್ಯ ಸದಸ್ಯರ ಹೆಸರು | ಶ್ರೀ ರಘುನಾಥ್ ರಾವ್ ಮಲ್ಕಾಪೂರೆ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ: | 20.09.2021 |
| ಉತ್ತರಿಸುವ ಸಚಿವರು: | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಇಲಾಖೆ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯಲ್ಲಿ ಕೋವಿಡ್-19 ಕೊರೋನಾ ವೈರಸ್‌ನಿಂದ ಭಾದಿತರಾಗಿರುವ ರೋಗಿಗಳ ಸಂಖ್ಯೆ ಎಷ್ಟು; ಈ ಪೈಕಿ ಗುಣಮುಖ ಹೊಂದಿರುವವರು ಮತ್ತು ಚಿಕಿತ್ಸೆ ಪಡೆಯುತ್ತಿರುವವರ ಸಂಖ್ಯೆ ಎಷ್ಟು (ದಿನಾಂಕ:15.09.2021 ರವರೆವಿಗೆ ತಾಲ್ಲೂಕುವಾರು ವಿವರ ನೀಡುವುದು) | 1. ಬೀದರ್ ಜಿಲ್ಲೆಯಲ್ಲಿ ಕೋವಿಡ್-19 ವೈರಸ್ ನಿಂದ ಭಾದಿತರಾಗಿರುವ ರೋಗಿಗಳ ಒಟ್ಟು ಸಂಖ್ಯೆ 24,305<br>2. ಕೋವಿಡ್-19 ವೈರಸ್ ನಿಂದ ಗುಣಮುಖರಾದವರ ಒಟ್ಟು ಸಂಖ್ಯೆ 23,900<br>3. ಕೋವಿಡ್-19 ವೈರಸ್ ನಿಂದ ಚಿಕಿತ್ಸೆ ಪಡೆಯುತ್ತಿರುವವರ ಸಂಖ್ಯೆ 03<br>4. ಇತರೆ ಜಿಲ್ಲೆಯ/ರಾಜ್ಯ ಭಾದಿತರಾಗಿರುವ ರೋಗಿಗಳ ಒಟ್ಟು ಸಂಖ್ಯೆ 321<br>5. ಕೋವಿಡ್-19 ಮರಣ ಪ್ರಕರಣಗಳು 398, ನಾನ್ ಕೋವಿಡ್ ನ ಮರಣ ಪ್ರಕರಣಗಳು 04, ಒಟ್ಟು=402 |

**ತಾಲ್ಲೂಕುವಾರು ಮಾಹಿತಿ**

| ಕ್ರ ಸಂ | ತಾಲ್ಲೂಕು | ಪಾಸಿಟಿವ್ ಪ್ರಕರಣ | ಬಿಡುಗಡೆ ಹೊಂದಿದವರ ಸಂಖ್ಯೆ | ಚಿಕಿತ್ಸೆ ಪಡೆಯುತ್ತಿರುವವರ ಸಂಖ್ಯೆ | ಮರಣ ಪ್ರಕರಣಗಳು | ನಾನ್ ಕೋವಿಡ್ ಮರಣ |
|---|---|---|---|---|---|---|
| 1 | ಔರಾದ | 2,601 | 2,569 | 1 | 36 | 1 |
| 2 | ಬಸವಕಲ್ಯಾಣ | 3,258 | 2,314 | 0 | 49 | 0 |
| 3 | ಭಾಲ್ಕಿ | 3,450 | 2,412 | 0 | 42 | 0 |
| 4 | ಬೀದರ್ | 11,293 | 11,058 | 2 | 207 | 2 |
| 5 | ಹುಮ್ನಾಬಾದ್ | 3,382 | 3,340 | 0 | 47 | 1 |
| 6 | ಇತರೆ | 321 | 307 | 0 | 17 | 0 |
| | ಒಟ್ಟು | 24,305 | 23,900 | 3 | 398 | 4 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ | ಕೊರೋನಾ ವೈರಸ್ ಆರಂಭ ಆದ ನಂತರ ದಿನಾಂಕ:15.09.2021 ರವರೆಗೆ ಈ ವೈರಸ್ ಸೋಂಕು ನಿವಾರಣೆಗೆ ಮತ್ತು ಅಗತ್ಯ ಚಿಕಿತ್ಸೆಗೆ ರಾಜ್ಯ ಸರ್ಕಾರ ಮಾಡಿರುವ ವೆಚ್ಚ ವೆಷ್ಟು; ಕೇಂದ್ರ ಸರ್ಕಾರದಿಂದ ಬಂದಿರುವ ಅನುದಾನ ಎಷ್ಟು (ವಿವರವಾದ ಮಾಹಿತಿ ಒದಗಿಸುವುದು) | **1.** ಕೋವಿಡ್ ನಿಯಂತ್ರಣಕ್ಕಾಗಿ ಖರ್ಚು ಮಾಡಿರುವ ಹಣದ ವಿವರವನ್ನು ಈ ಕೆಳಕಂಡಂತಿದೆ. (ರೂ.ಕೋಟಿಗಳಲ್ಲಿ) |

| ಕ್ರ. ಸಂ | ಸಂಸ್ಥೆಯ ಹೆಸರು | ವೆಚ್ಚ ಮಾಡಿದ ಮೊತ್ತ |
|---|---|---|
| 1 | ರಾಷ್ಟ್ರೀಯ ಆರೋಗ್ಯ ಅಭಿಯಾನ | 598.48 |
| 2 | ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ | 600.71 |
| 3 | ಕೆ.ಎಸ್.ಎಂ.ಎಸ್.ಸಿ.ಎಲ್ | 984.06 |
| 4 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ<br>1.ಕೋವಿಡ್-19ರ ವ್ಯಾಕ್ಸಿನ್ ಖರೀದಿಗಾಗಿ<br>2.ತಾತ್ಕಾಲಿಕವಾಗಿ ಮಾನವ ಸಂಪನ್ಮೂಲ ಸೇವೆಗಾಗಿ | <br>88.68<br>136.12 |
| 5 | ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಸ್ಥೆ | 33.29 |
| | ಒಟ್ಟು ರೂ. ಕೋಟಿಗಳಲ್ಲಿ | 2441.34 |

2. ರಾಷ್ಟ್ರೀಯ ಆರೋಗ್ಯ ಅಭಿಯಾನ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಹಣದ ಪ್ರಮಾಣದ ವಿವರ ಈ ರೀತಿಯಾಗಿದೆ.
ರಾಷ್ಟ್ರೀಯ ಆರೋಗ್ಯ ಅಭಿಯಾನ ಈ ಯೋಜನೆಯಲ್ಲಿ ಮಾತ್ರ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರದ ಅನುದಾನವು ಬಿಡುಗಡೆಯಾಗಿರುತ್ತದೆ. ಉಳಿದಂತೆ ತೋರಿಸಿದ ಪಟ್ಟಿಯಲ್ಲಿನ ವೆಚ್ಚಗಳು ರಾಜ್ಯ ಸರ್ಕಾರದಿಂದ ಬಿಡುಗಡೆಗೊಳಿಸಿದೆ.

| ಕ್ರ.ಸಂ | ಯೋಜನೆ ವಿವರ | ಕೇಂದ್ರ ಸರ್ಕಾರದ ಅನುದಾನ | ರಾಜ್ಯಸ ರ್ಕಾರದ ಅನುದಾನ | ಒಟ್ಟು ಅನುದಾನ |
|---|---|---|---|---|
| 01 | ರಾಷ್ಟ್ರೀಯ ಆರೋಗ್ಯ ಅಭಿಯಾನ | 486.05 | 391.96 | 878.01 |

3. ಬೀದರ್ ಜಿಲ್ಲೆಗೆ.ರೂ. 70 ಲಕ್ಷ ಬಿಡುಗಡೆಯಾಗಿದ್ದು, ವೆಚ್ಚದ ವಿವರ ಈ ಕೆಳಕಂಡಂತಿದೆ:- (ಕೇಂದ್ರ ಪುರಸ್ಕೃತ)

| | | |
|---|---|---|
| 1 | Diagnostics and Samples ransports | ರೂ.19,79,140.00 |
| 2 | Equipments | ರೂ. 81,900.00 |
| 3 | Covid Staff Salary | ರೂ.13,76,866.00 |
| 4 | Mobility Support (POL) | ರೂ.25,24,813.00 |
| 5 | IEC | ರೂ. 7,02,912.00 |
| 6 | Miscellaneous | ರೂ. 3,23,339.00 |
| | ಖರ್ಚು | ರೂ.69,88,970=00 |
| | ಉಳಿದ ಅನುದಾನ | ರೂ.11,030=00 |

ರಾಜ್ಯ ಸರ್ಕಾರದಿಂದ ಕೊರೊನಾ ವೈರಸ್ ಆರಂಭವಾದ ನಂತರ ಕೋವಿಡ್-19 ರಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರಿಗೆ ಪ್ರತಿ ತಿಂಗಳು ಗೌರವ ಧನ ನೀಡಲು ಬಿಡುಗಡೆಯಾದ ಅನುದಾನದ ವಿವರ.

1. ಬಿಡುಗಡೆಯಾದ ಅನುದಾನ-ರೂ. 5,41,42,961=00
2. ಖರ್ಚಾದ ಅನುದಾನ-ರೂ. 4,82,3,778=00
3. ಬಾಕಿ ಉಳಿದ ಅನುದಾನ- ರೂ. 59,39,183=00

| | | |
|---|---|---|
| ಇ | ಕೊರೋನಾ ವೈರಸ್ ಹಿನ್ನೆಲೆಯಲ್ಲಿ ಖರೀದಿ ಮಾಡಲಾದ ವಿವಿಧ ಉಪಕರಣಗಳಿಗೆ ತಗುಲಿದ ವೆಚ್ಚ ಎಷ್ಟು (ಖರೀದಿ ಮಾಡಿದ್ದಲ್ಲಿ ಆಯಾ ಉಪಕರಣಗಳವಾರು ಬಿಲ್ ಗಳೊಂದಿಗೆ ಮಾಹಿತಿ ನೀಡುವುದು) | ಕೊರೋನಾ ವೈರಸ್ ಹಿನ್ನೆಲೆಯಲ್ಲಿ ಯಾವುದೇ ಉಪಕರಣಗಳನ್ನು ಖರೀದಿ ಮಾಡಿರುವುದಿಲ್ಲ. |
| ಈ | ವಿವಿಧ ರೀತಿಯ ಖರೀದಿ ಪ್ರಕ್ರಿಯೆಯಲ್ಲಿ ಅಕ್ರಮಗಳು ನಡೆದಿರುವ ಕುರಿತು ಆರೋಪಗಳಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಭಾಗಿಯಾಗಿರುವ ಅಧಿಕಾರಿಗಳ ಮೇಲೆ | ಅನ್ವಯಿಸುವುದಿಲ್ಲ. |

| | | |
|---|---|---|
| | ಸರ್ಕಾರ ಕೈಗೊಂಡಿ ಕ್ರಮಗಳೇನು: (ಸಂಪೂರ್ಣ ವಿವರ ಒದಗಿಸುವುದು) | |
| ಉ | ಮೂರನೇ ಅಲೆಗೆ ಜಿಲ್ಲಾಡಳಿತ ತೆಗೆದುಕೊಂಡ ಮುನ್ನಚ್ಚರಿಕೆಯ ಮಹತ್ವದ ಕ್ರಮಗಳೇನು? (ಮಾಹಿತಿ ನೀಡುವುದು) | 1. ಜಿಲ್ಲೆಯಲ್ಲಿ 18 ವರ್ಷ ಮೇಲ್ಪಟ್ಟವರಿಗೆ ಕೋವಿಡ್ ಲಸಿಕಾಕರಣ ಮಾಡಲಾಗುತ್ತಿದೆ. ಇಲ್ಲಿಯವರೆಗೆ ಸುಮಾರು ಪ್ರತಿಶತ 65% ರಷ್ಟು ಗುರಿ ಸಾಧಿಸಲಾಗಿದೆ.<br>2. ರಾಜ್ಯ ಸರ್ಕಾರದ ಮಾರ್ಗಸೂಚಿಯಂತೆ ಜಿಲ್ಲೆಯಲ್ಲಿ ಪ್ರತಿದಿನ ಸುಮಾರು 2100 ಜನರನ್ನು ಕೋವಿಡ್ ಪರೀಕ್ಷೆಗೆ ಒಳಪಡಿಸುವ ಗುರಿ ಹೊಂದಲಾಗಿದೆ.<br>3. ಪ್ರತಿ ಕೋವಿಡ್ ಪ್ರಕರಣಗಳ ಸಂಪರ್ಕ (ಪ್ರಾಥಮಿಕ ಹಾಗೂ ದ್ವಿತೀಯ) ವ್ಯಕ್ತಿಗಳನ್ನು ಪರೀಕ್ಷಿಸಲಾಗುತ್ತಿದೆ.<br>4. ಆರೋಗ್ಯ ಇಲಾಖೆಯ ಸಿಬ್ಬಂದಿಗಳು ಮನೆ ಮನೆ ಭೇಟಿ ನೀಡಿ ಸಮೀಕ್ಷೆ ಮಾಡಿ ರೋಗ ಲಕ್ಷಣಗಳನ್ನು ಹೊಂದಿರುವ ವ್ಯಕ್ತಿಗಳನ್ನು ಕೋವಿಡ್ ಪರೀಕ್ಷೆಗೆ ಒಳಪಡಿಸಲಾಗುತ್ತಿದೆ.<br>5. ಜಿಲ್ಲೆಯಲ್ಲಿ ಸಂಭವನೀಯ ಮೂರನೇ ಅಲೆಯಲ್ಲಿ ಮಕ್ಕಳಿಗೆ ಸೋಂಕು ತಗುಲದಂತೆ ಹಾಗೂ ಸೋಂಕಿತ ಮಕ್ಕಳಿಗೆ ಚಿಕಿತ್ಸಾ ನಿರ್ವಹಣೆಗಾಗಿ ಸೂಕ್ತ ವ್ಯವಸ್ಥೆ ಮಾಡಲಾಗಿದೆ.<br>6. ವೈದ್ಯಕೀಯ/ಅರೆ ವೈದ್ಯಕೀಯ ಸಿಬ್ಬಂದಿಗಳಿಗೆ ರಾಜ್ಯ ಮಟ್ಟದ ವಿಡಿಯೋ ಸಂವಾದದ ಮೂಲಕ ಮಕ್ಕಳಿಗೆ ಸೋಂಕು ತಗುಲಿದಾಗ ಚಿಕಿತ್ಸೆ ಹಾಗೂ ನಿರ್ವಹಣೆ ಕುರಿತು ತರಬೇತಿ ನೀಡಲಾಗುತ್ತಿದೆ.<br>7. ಜಿಲ್ಲಾ ಆಸ್ಪತ್ರೆ, ತಾಲ್ಲೂಕು ಆಸ್ಪತ್ರೆ ಮತ್ತು ಕೋವಿಡ್ ಕೇರ್ ಸೆಂಟರ್‌ಗಳಲ್ಲಿ ಅಗತ್ಯತೆಗೆ ಅನುಸಾರವಾಗಿ ಹಾಸಿಗೆ (ಬೆಡ್)ಗಳನ್ನು ಮೀಸಲಿಡಲಾಗಿದೆ. ಪ್ರತಿ ತಾಲೂಕು ಆಸ್ಪತ್ರೆಗಳಲ್ಲಿ ಮಕ್ಕಳಿಗಾಗಿ 10 ಹಾಸಿಗೆ ಮತ್ತು ಜಿಲ್ಲಾ ಆಸ್ಪತ್ರೆಯಲ್ಲಿ ಒಟ್ಟು 72 ಮಕ್ಕಳಿಗಾಗಿ ಹಾಸಿಗೆಗಳನ್ನು ಮೀಸಲಿಡಲಾಗಿದೆ. ಜಿಲ್ಲಾ ಆಸ್ಪತ್ರೆಯಲ್ಲಿ 3 ಪಿಡಿಯಾಟ್ರಿಕ್ ವೆಂಟಿಲೇಟರ್ ಮತ್ತು 2 ನಿಯೋನೇಟಲ್ ವೆಂಟಿಲೇಟರ್‌ಗಳ ಲಭ್ಯತೆ ಇದೆ. ಹೆಚ್ಚುವರಿಯಾಗಿ ಕೆಕೆಆರ್‌ಡಿಬಿಗೆ ಬೇಡಿಕೆ ಸಲ್ಲಿಸಲಾಗಿದೆ. |

**ಆಕುಕ 128 ಎಸ್‌ಎಂಎಂ 2021**

(ಡಾ||ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು